# ಪಂಚಮ

ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ ಸಾಮಾಜಿಕ, ಬೌದ್ಧಿಕ ದಬ್ಬಾಳಿಕೆಯ ವಿರುದ್ಧ ಶೋಷಣೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಯತ್ನಿಸುತ್ತಿರುವ ಪಂಚಮಕ್ಕೆ ಚಂದಾದಾರರಾಗಿರಿ.

ವಾರ್ಷಿಕ ಚಂದಾ 5 ರೂ.ಗಳು

ಸಂಪುಟ : 3    ಸಂಚಿಕೆ : 5    5, ಫೆಬ್ರುವರಿ 1979    ಪಾಕ್ಷಿಕ    ಬೆಲೆ : 20ಪೈಸೆ

## ಕೊಳ್ಳೇಗಾಲ : ಕರಾಳ ದಿನಾಚರಣೆ

[ಪಂಚಮ ಪ್ರತಿನಿಧಿಯಿಂದ]

ಮೈಸೂರು ಜಿಲ್ಲೆ ಕೊಳ್ಳೆಗಾಲದಲ್ಲಿ ಕಳೆದ ಜನವರಿ 26 ರಂದು ದಲಿತರು ಭಿನ್ನವಾಗಿ ಗಣರಾಜ್ಯೋತ್ಸವವನ್ನು ಆಚರಿಸಿದರು. ದಲಿತರಿಗೆ ಆಗುತ್ತಿರುವ ವಂಚನೆ ಸುಲಿಗೆಯನ್ನು ಪ್ರತಿಭಟಿಸಲು ಇಲ್ಲಿನ ದಲಿತ ಸಂಘ ಸಂಸ್ಥೆಗಳು ಅರ್ಥಹೀನ ಗಣರಾಜ್ಯೋತ್ಸವವನ್ನು ಪ್ರತಿಭಟಿಸಿದರು. ಪ್ರವಾಸಿ ಬಂಗಲೆ ಬಳಿಯ ಮೈದಾನದಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ದಲಿತರು ಕಪ್ಪು ಬ್ಯಾಡ್ಜ್ ಧರಿಸಿ ಸೇರಿದ್ದರು. ಶ್ರೀ ರಾಜಣ್ಣನವರು ಕಪ್ಪು ಧ್ವಜಾರೋಹಣ ಮಾಡಿ ಮಾತನಾಡಿದರು. ಮುಖ್ಯ

[5ನೇ ಪುಟನೋಡಿ]

## ಸಿದ್ಲಿಪುರ : ಭೂಮಿಗಳಿಸಿದ ದಿಟ್ಟ ಹೋರಾಟ

[ಪಂಚಮ ಪ್ರತಿನಿಧಿಯಿಂದ]

ಸುಮಾರು 400 ದಿನಗಳ ಸಿದ್ಲಿಪುರ ಹರಿಜನರ ಹೋರಾಟವು ದಲಿತ ಸಂಘರ್ಷ ಸಮಿತಿ ಹೋರಾಟಗಳಲ್ಲಿ ಅತ್ಯಂತ ಗಮನಾರ್ಹವಾಗಿದೆ. ಏಕಕಾಲದಲ್ಲಿ ಭೂಮಾಲೀಕರ ಹಾಗು ಸರ್ಕಾರದ ವಿರುದ್ಧ ನಡೆಸಿದ ಈ ಹೋರಾಟದಲ್ಲಿ ಅವರು ಜಯಶಾಲಿಗಳಾದರು. ದ. ಸ. ಸ. ಹೋರಾಟಕ್ಕೊಂದು ಹೊಸ ಬಾಗಿಲನ್ನು ತೆರೆದರು.

ಸಿದ್ಲಿಪುರ ಶಿವಮೊಗ್ಗ ಜಿಲ್ಲಾ ಭದ್ರಾವತಿ ತಾಲ್ಲೂಕಿನ ಒಂದು ಚಿಕ್ಕ ಗ್ರಾಮ. ಅಲ್ಲಿ ಕಳೆದ ತಲೆಮಾರಿನ ಹರಿಜನರ 11 ಕುಟುಂಬಗಳಿಂದು ಬೆಳೆದು ಒಡೆದು 50 ಕುಟುಂಬಗಳಾಗಿವೆ. ಈ ಹರಿಜನ ಕುಟುಂಬಗಳು ಊರಿನ ಸಾರ್ವಜನಿಕ ಚಾಕರಿ, ಇತ್ಯಾದಿಗಳನ್ನು ಮಾಡುತ್ತಿದ್ದುದರಿಂದ ಸರ್ಕಾರವು ಈ ಹಿಂದೆ ಅವರಿಗೆ ಸರ್ವೆ ನಂ. 93ರರಲ್ಲಿ 33 ಎಕರೆ ಭೂಮಿಯನ್ನು ಮಂಜೂರು ಮಾಡಿತ್ತು. ಅದನ್ನು ಅವರು ತಲೆಮಾರುಗಳಿಂದ ಸಾಗುವಳಿ ಮಾಡುತ್ತ ಬಂದಿದ್ದರು.

ಈಗ್ಗೆ ಸುಮಾರು 15ವರ್ಷಗಳ ಹಿಂದೆ, ಸಿದ್ಲಿಪುರದಲ್ಲಿ ಖಂಡಸಾರಿ ಸಕ್ಕರೆ ಕಾರ್ಖಾನೆಯನ್ನು ಆರಂಭಿಸಿದ ಭೂಮಾಲೀಕ ಹಾಗೂ ಹಿಂದೂ ಮಹಾ ಸಭಾದ ಅಧ್ಯಕ್ಷ ಭೂಪಾಳಂ ಮತ್ತು ಸಹೋದರರು ತಮ್ಮ ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳಲು, ಓದಲು-ಬರೆಯಲು ಬಾರದ ಈ ಹಳ್ಳಿಯ ಅಸ್ಪೃಶ್ಯರಿಗೆ, ಬೇರೆ ಕಡೆ ಜಮೀನು ಮತ್ತು ಮುಂಗಡ ಹಣ ಕೊಡುವುದಾಗಿ ಆಸೆ

[5ನೇ ಪುಟನೋಡಿ]




ಗೆಲ್ಲುವ ಛಲದಿಂದ ಒಮ್ಮೊಮ್ಮೆ ಒಬ್ಬೊಬ್ಬರ ಸರದಿ ನಿರಶನವೂ ಮುಂದುವರೆದಿತ್ತು.

ಪಂಚಮ

# ಹಿಂದೂಧರ್ಮ ಮತ್ತು ಅಸ್ಪೃಶ್ಯತೆ

ಕಳೆದವಾರ ವ್ಯಾಸನಗರದಲ್ಲಿ ಸಮಾವೇಶಗೊಂಡಿದ್ದ ವಿಶ್ವ ಹಿಂದೂ ಸಮ್ಮೇಳನದಲ್ಲಿ ಸ್ವೀಕೃತವಾದ ಕೆಲವು ನಿರ್ಣಯಗಳು ಸ್ವಾರಸ್ಯಕರವಾಗಿವೆ. ದಲಿತರ ಬದುಕಿಗೆ ಸಂಬಂಧಿಸಿದಂತೆ ಈ ಸಮ್ಮೇಳನ ಮಾಡಿದ ನಿರ್ಣಯವನ್ನು ಪರಿಶೀಲಿಸ ಬೇಕಾಗಿದೆ. 'ಅಸ್ಪೃಶ್ಯತೆಯನ್ನು ತೊಡೆದು ಹಾಕಬೇಕು. ಆದರೆ ಜಾತಿಪದ್ಧತಿಯನ್ನು ವಿವಾಹದ ಉದ್ದೇಶಗಳಿಗಾಗಿ ಉಳಿಸಿಕೊಳ್ಳಬೇಕು.' ಎಂಬ ಸೂಚನೆ ಮಂಡಿತವಾದ ಕೂಡಲೇ 'ಓಂ' ಎಂಬ ನೂರಾರು ಕಂಠಗಳಿಂದ ಒಪ್ಪಿಗೆಯ ಮಾರ್ಧನಿ. ಅಸ್ಪೃಶ್ಯತೆ ಇಂಡಿಯಾದ ಕೋಟ್ಯಾಂತರ ದಲಿತರ ಮಾನವೀಯ ಬದುಕನ್ನು ಅಪಹರಿಸಿದ ಕರಾಳ ಆಚರಣೆ. ಇದರ ಹುಟ್ಟು ಜಾತಿಪದ್ಧತಿಯಲ್ಲಿ· ಜಾತಿಪದ್ಧತಿ ಮನುಷ್ಯರನ್ನು ಪ್ರತ್ಯೇಕ ಕೊಟ್ಟಿಗೆಗಳಲ್ಲಿ ಕೂಡಿ ಮಾನವ ಭೇದವನ್ನು ಆರಂಭಿಸಿದ ಕ್ರೂರ ವ್ಯವಸ್ಥೆ. ಜಾತಿಪದ್ಧತಿ ಅಸ್ಪೃಶ್ಯತೆಯ ತಾಯಿ. ವ್ಯಾಸನಗರದಲ್ಲಿ ಸ್ವೀಕರಿಸಿದ ನಿರ್ಣಯವು ಬೇರನ್ನು ಪೋಷಿಸುತ್ತಾ ಕೊಂಬೆ ಕಡಿಯುವ ಕೆಲಸಕ್ಕೆ ಕೈ ಹಾಕಿದಂತೆ ಆಗಿದೆ. ಆದ್ದರಿಂದ ಅಸ್ಪೃಶ್ಯತೆ ನಿವಾರಣೆ ಆಗಲು ಜಾತಿಪದ್ಧತಿ ನಿರ್ಮೂಲನ ಆಗಲೇ ಬೇಕು. ಈ ಸರಳ ವಿಚಾರ "ದೊಡ್ಡ" ಜನಕ್ಕೆ ಯಾಕೆ ಹೊಳೆಯಲಿಲ್ಲ? ಮತಾಂಧವಾದಿಗಳ 'ಅಸ್ಪೃಶ್ಯತಾ ನಿರ್ಮೂಲನ' ಘೋಷಣೆ ಬರೀ ಸುಳ್ಳು ತಟವಟ ಅಷ್ಟೇ. ಈಗಾಗಲೇ ಸಂವಿಧಾನದಲ್ಲಿ 'ಅಸ್ಪೃಶ್ಯತೆ ನಿರ್ಮೂಲನ' ಸೋತಿದೆ. ವರ್ಣಾಶ್ರಮವನ್ನು ಎತ್ತಿ ಹಿಡಿದು ಅಸ್ಪೃಶ್ಯತೆಯನ್ನು ಖಂಡಿಸಿದ ಗಾಂಧೀಜಿಯೂ ಇದೇ ತಪ್ಪು ಮಾಡಿದರು. ಗಾಂಧೀಜಿಯ ಈ ವಂಚನೆಯನ್ನು ದಲಿತರು ತಿಳಿಯಲು ಹೆಚ್ಚುಕಾಲ ಬೇಕಾಗಲಿಲ್ಲ. ಹಾಗೆಯೇ ಅಸ್ಪೃಶ್ಯತೆಯನ್ನು ತೊಡೆದುಹಾಕಿ ಜಾತಿಪದ್ಧತಿಯನ್ನು ಉಳಿಸಿಕೊಳ್ಳುವ ಕುತಂತ್ರ ಬಯಲಾಗಲು ಹೆಚ್ಚು ಕಾಲ ಬೇಕಿಲ್ಲ. ಪಂಚಮ ವರ್ಗಕ್ಕೆ ಸೇರಿದ ದಲಿತರನ್ನು ಹಿಂದೂಗಳು ಎಂದು ನಂಬಿಸುವ ಪ್ರಯತ್ನಗಳಲ್ಲಿ ಇದೂ ಒಂದು. ಬಂಡವಾಳಗಾರರು ಮತ್ತು ಜಮೀನುದಾರರ ಹಿತಾಸಕ್ತಿ ಕಾಪಾಡುವ ಜನವಿರೋಧೀ ಸಿದ್ಧಾಂತವುಳ್ಳ ಹಿಂದೂ ಧರ್ಮ ಶೋಷಕರ ಅಳಿವಿನೊಂದಿಗೆ ತಾನೂ ಅಳಿಯುತ್ತದೆ. ಈ ಸಂಗತಿಯನ್ನು ಬಲ್ಲ ಯಾವ ದಲಿತನೂ ಹಿಂದೂ ಧರ್ಮದೊಂದಿಗೆ ತನ್ನನ್ನು ತಾನು ಗುರುತಿಸಿಕೊಳ್ಳಲಾರ. ಹಿಂದೂಗಳ ಸಮ್ಮೇಳನ ಅಸ್ಪೃಶ್ಯತೆಯನ್ನು ತೊಡೆದುಹಾಕಲು ಕರೆಕೊಟ್ಟಿರುವುದರಿಂದ ಯಾರೂ ಸಂತೋಷ ಪಡಬೇಕಾಗಿಲ್ಲ. ಯಾಕೆಂದರೆ ಇದು ನಿರೀಕ್ಷಿತ. ಅಂದರೆ ಅಸ್ಪೃಶ್ಯತೆಯನ್ನು ಆಚರಿಸುವುದು ಬಂಡವಾಳಶಾಹಿ ಸಮಾಜ ವ್ಯವಸ್ಥೆಯಲ್ಲಿ ಕಠಿಣವಾಗಿದೆ. ಆದ್ದರಿಂದ ಪರಿಸ್ಥಿತಿಯ ಒತ್ತಡಗಳಿಂದ ಇಂಥ ನಿರ್ಣಯ ಅನಿವಾರ್ಯವಾಗಿದೆ. ದಲಿತರಿಗೆ ಸ್ವಾಭಿಮಾನವನ್ನು ಯಾರೂ ದಾನ ಮಾಡಬೇಕಾಗಿಲ್ಲ. ದಲಿತರು ಸಂಘಟಿತರಾಗಿ ಹೋರಾಟದ ಮೂಲಕ ತಮ್ಮ ಹಕ್ಕುಗಳನ್ನು ಪಡೆದೇ ತೀರುತ್ತಾರೆಂಬ ವಿಶ್ವಾಸ ನಮಗಿದೆ.

## ದಲಿತ ಸಂಘಟನೆ ತೀವ್ರತೆಗೆ ಸಾಂಸ್ಕೃತಿಕ ಚಳವಳಿ ಆರಂಭ

ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ದಲಿತ ಸಂಘಟನೆಯನ್ನು ತೀವ್ರಗೊಳಿಸುವ ಉದ್ದೇಶ ಇಟ್ಟುಕೊಂಡು, ಜನವರಿ 25ರಂದು ಬೆಂಗಳೂರಿನ ಟೌನ್‌ಹಾಲ್‌ನಲ್ಲಿ "ದಲಿತ ಕಲಾಮಂಡಲಿ"ಯ ಉದ್ಘಾಟನೆಯಾಯಿತು.

ಉದ್ಘಾಟನೆ ಮಾಡಿದ ಶ್ರೀಮತಿ ಸುಮಿತ್ರಾಬಾಯಿಯವರು "ದಲಿತರಲ್ಲಿ ಅವರ ಕೀಳರಿಮೆಯಿಂದ ಕಲಾ ಸಾಹಿತ್ಯ ಸುಪ್ತವಾಗಿ ಉಳಿದು ಬಿಟ್ಟಿದೆ. ಮಾನವತೆಯನ್ನು ಪ್ರತಿಪಾದಿಸುವ ಕಲಾ ಸಾಹಿತ್ಯ ದಲಿತರಲ್ಲಿ ಮಾತ್ರ ಇದ್ದು. ದಲಿತ ಸಾಂಸ್ಕೃತಿಕ ಚಳವಳಿ 'ಸಾಮಾಜಿಕ ಕ್ರಾಂತಿಯನ್ನು ತೀವ್ರಗೊಳಿಸುತ್ತದೆ." ಎಂದರು.

ಕು॥ ಸುಜಾತ ಅವರು ಮಾತನಾಡಿ "ದಲಿತ ಕಲಾಮಂಡಲಿ"ಗಳು ಶೋಷಣೆಗೆ ಒಳಗಾಗಿರುವವರನ್ನು ವಿಮೋಚನೆ ಕಡೆಗೆ ಕೊಂಡೊಯ್ಯಲಿ" ಎಂದು ಆಶಿಸಿದರು.

ಅಧ್ಯಕ್ಷತೆ ವಹಿಸಿದ್ದ ಇಂದೂಧರ ಹೊನ್ನಾಪುರ ಅವರು "ಇದು ತನಕ ನಾವು ನೋಡುತ್ತಿದ್ದ ಹಾಡುಗಳು–ಪುಸ್ತಕಗಳು ಎಲ್ಲಾ ನಮ್ಮನ್ನು ಅಸಹ್ಯ ಸ್ಥಿತಿಗೆ ತಳ್ಳುವಂತದ್ದಾಗಿವೆ. ಈಗ ದಲಿತರನ್ನು ಬಿಡುಗಡೆಗೊಳಿಸುವಂತ ಬಂಡಾಯದ ಕಲೆ ಬರಬೇಕಾಗಿದೆ" ಎಂದರಲ್ಲದೆ 'ಕಲಾ ಮಂಡಲಿಯ' ಉದ್ದೇಶವನ್ನೂ ಸ್ಪಷ್ಟಪಡಿಸಿದರು.

ನಂತರ ಡಾ॥ ಲಕ್ಷ್ಮೀನಾರಾಯಣ ಮತ್ತು ತಂಡದವರಿಂದ ದಲಿತರ ನೋವುಗಳನ್ನು ಹೇಳುವ ಹಾಡುಗಳು ಮತ್ತು ನಾಟಕಗಳ ಪ್ರದರ್ಶನ ನಡೆಯಿತು.

ಶ್ರೀ ಮುನಿಯೆಲ್ಲಪ್ಪ ಆರಂಭದಲ್ಲಿ ಕ್ರಾಂತಿಗೀತೆ ಹಾಡಿದರು.

## ಅಂಬೇಡ್ಕರ್ ಪ್ರತಿಮೆ ಅನಾವರಣ ನಿಲುಗಡೆ: ಆರುಮುಗಂರ ಕೈವಾಡ

[ಪಂಚಮ ಪ್ರತಿನಿಧಿಯಿಂದ]

ಕೋಲಾರ ಜಿಲ್ಲೆ ಬಂಗಾರುಪೇಟೆಯಲ್ಲಿ ತಾ॥ 26–1–79ರಂದು ಡಾ॥ ಅಂಬೇಡ್ಕರ್‌ರವರ ಪ್ರತಿಮೆ ಅನಾವರಣ ಕಾರ್ಯಕ್ರಮದ ಸಿದ್ಧತೆ ನಡೆದಿತ್ತು. ಈ ಬಗ್ಗೆ ಸಾಕಷ್ಟು ಪ್ರಚಾರ ನಡೆದಿದ್ದುದರಿಂದ ದೂರದ ಹಳ್ಳಿಗಳಿಂದ ದಲಿತರು ಹಿಂಡುಹಿಂಡಾಗಿ ಬಂದಿದ್ದರು. ಅವರೆಲ್ಲರಿಗೂ ತಮ್ಮ ಜನಾಂಗದ ಕಣ್ಣು ತೆರೆಸಿದ ಒಬ್ಬ ಮಹಾನ್ ವ್ಯಕ್ತಿಯ ಪ್ರತಿಮೆ ಅನಾವರಣ ಸಮಾರಂಭದಲ್ಲಿ ಭಾಗವಹಿಸುತ್ತಿದ್ದೇವೆಂಬ ಸಂತೋಷ. ಆದರೆ ಕಾರ್ಯಕ್ರಮದ ಪಟ್ಟಿಯಲ್ಲಿದ್ದ ಸಮಯದಂತೆ ಸಮಾರಂಭ ಆರಂಭವಾಗಬೇಕಾಗಿದ್ದರೂ ಆಗಲಿಲ್ಲ. ಕಾರಣ ಪ್ರತಿಮೆ ಅನಾವರಣ ಮಾಡಬೇಕಿದ್ದ ಹೈಕೋರ್ಟಿನ ಜಡ್ಜ್ ಕೆ. ಭೀಮಯ್ಯನವರೇ ಬಂದಿರಲಿಲ್ಲ. ಎಲ್ಲರೂ ಅವರಿಗಾಗಿ ಕಾಯುತ್ತಾ ಹೊತ್ತು ಮೀರುತ್ತಾ ಹೋದಂತೆ ಎಲ್ಲರ ಮುಖಗಳಲ್ಲೂ ನಿರಾಶೆ ಕವಿಯತೊಡಗಿತು. ಕೊನೆಗೂ ಅವರು ಬರಲಿಲ್ಲ, ಸಮಾರಂಭ ನಡೆಯಲಿಲ್ಲ. ನಿರಾಶರಾದ ದಲಿತರು ತಮ್ಮ ತಮ್ಮ ಊರುಗಳ ಕಡೆಗೆ ಕಾಲ್ತೆಗೆದರು.

ಆ ಸಮಾರಂಭ ನಡೆಯದೆ ಇದ್ದುದರ ಹಿಂದೆ ರಿಪಬ್ಲಿಕನ್ ಪಕ್ಷದ ಶಾಸಕ ಸಿ. ಎಂ. ಆರ್ಮುಗಂ ಕೈವಾಡ ಇದೆ ಎಂದು ಸುದ್ದಿ ಹಬ್ಬಿದೆ. ಇವರು ತಮ್ಮನ್ನು ಸಮಾರಂಭಕ್ಕೆ ಆಹ್ವಾನಿಸದಿದ್ದುದರಿಂದ ಸಿಟ್ಟಿಗೆದ್ದು ಪ್ರತಿಮೆ ಅನಾವರಣಗೊಳಿಸಬೇಕಾಗಿದ್ದ ಶ್ರೀ ಭೀಮಯ್ಯನವರಿಗೆ ಸಮಾರಂಭಕ್ಕೆ ಹಾಜರಾಗದಿರಲು ಫೋನಿನ ಮೂಲಕ ತಿಳಿಸಿದರಂತೆ. ಅಂಬೇಡ್ಕರ್ ಅವರನ್ನು ಕುರಿತು ಜಿಲ್ಲೆಯಲ್ಲಿ ಏನೇ ಮಾಡಬೇಕಾದರೂ ತಮ್ಮ ಅನುಮತಿ ಸಲಹೆ ಇಲ್ಲದೆ ಮಾಡಬಾರದೆಂದು ಈ ಶಾಸಕರು ಕಟ್ಟಪ್ಪಣೆ ಸಹ ಮಾಡಿದ್ದಾರಂತೆ. ಅಂತೆಯೇ ಪ್ರತಿಮೆ ಸಮಿತಿಯ ಮುಖ್ಯರಿಗೆ ಬೆದರಿಕೆ ಕೂಡ ಹಾಕಲಾಗಿದೆಯಂತೆ.

ಅಂಬೇಡ್ಕರ್ ದಲಿತರಿಗೆ ಚಿರಂತನ ಸ್ಫೂರ್ತಿ. ಇಂತಹವರನ್ನು ಗುತ್ತಿಗೆಯಾಗಿ ಮಾಡಿಕೊಳ್ಳಲು ಯಾವುದೇ ಪಕ್ಷಕ್ಕಾಗಲೀ, ವ್ಯಕ್ತಿಗಾಗಲೀ ಅಧಿಕಾರವಿಲ್ಲ ಎಂಬುದನ್ನು ಸ್ಪಷ್ಟಪಡಿಸಬೇಕಾಗಿದೆ. ವ್ಯಕ್ತಿಗಳ, ಸಿದ್ಧಾಂತಗಳ ಮನಾಪಲಿ ಮಾಡಿಕೊಳ್ಳುವವರ ಕೀಳು ದರ್ಜೆಯ ಪ್ರವೃತ್ತಿಯನ್ನು ಎಲ್ಲಾ ಎಚ್ಚೆತ್ತವರು ಧಿಕ್ಕರಿಸಬೇಕಾಗಿದೆ.

# ಸಿಕ್ಕಿದ ಹುದ್ದೆ ದಕ್ಕಲಿಲ್ಲ; 'ಪವಾಡ' ತನಿಖೆಯಾಗಲಿ

ಮಾನ್ಯರೇ,

ನಾನೊಬ್ಬ ಬಡ ಹರಿಜನ ನಿರುದ್ಯೋಗಿ, ನನಗೆ ಚಿಕ್ಕಂದಿನಲ್ಲೇ ಪೋಲಿಯೋ ತಗುಲಿದ ಕಾರಣ ಬಲಗಾಲು ಸರಿಯಾಗಿ ಸ್ವಾಧೀನದಲ್ಲಿರದ ಅಂಗ ವಿಕಲ. ಉದ್ಯೋಗಕ್ಕಾಗಿ ಸತತ ಹುಡುಕಾಟ. ನಂತರ ಸಿಕ್ಕಿದ ಉದ್ಯೋಗವು ನನ್ನ ಪಾಲಿಗೆ ದಕ್ಕ ಲಿಲ್ಲ. ಭ್ರಷ್ಟ ವ್ಯವಸ್ಥೆಯ ಸರ್ಕಾರ ನನ್ನ ಹುದ್ದೆಯ ಬಗ್ಗೆ ಮೋಸದ ಜಾಲ ಬೀಸಿದೆ.

ನನಗೆ ಅಸಿಸ್ಟೆಂಟ್ ಡೈರೆಕ್ಟರ್, ಉಪವಿಭಾಗ, ಉದ್ಯೋಗ ವಿನಿಮಯ ಕಚೇರಿ ಬೆಂಗಳೂರಿನಿಂದ ದಿನಾಂಕ 8-5-78ರಂದು ಪ್ರಾಥಮಿಕ ಶಾಲೆಯ ಶಿಕ್ಷಕ ಹುದ್ದೆಗೆ ಸಂದರ್ಶನ ಕರೆಬಂತು. ಅಂತೆಯೇ ನನಗೆ ಬೆಂಗಳೂರಿನ ಶಿಕ್ಷಣ ಶಾಖೆಯ ಉಪ ನಿರ್ದೇಶಕರ ಕಚೇರಿಯಲ್ಲಿ (ಬೆಂಗಳೂರು ಗ್ರಾಮಾಂತರ) 2-12-78ರಂದು ಸಂದರ್ಶನ ನಡೆಯಿತು ಮತ್ತೆ ಮುಂದೇನಾಯಿತು ನನಗೆ ತಿಳಿಯಲಿಲ್ಲ. ನಂತರ 28-12-78ರಂದು ಅಂಗವಿಕಲರಿಗಾಗಿ ಇರುವ ವಿಶೇಷ ಉದ್ಯೋಗ ವಿನಿಮಯ ಕೇಂದ್ರದ ಸಹಾಯಕ ನಿರ್ದೇಶಕರನ್ನು ಕಂಡು ಉದ್ಯೋಗಕ್ಕಾಗಿ ಮನವಿಮಾಡಿಕೊಂಡೆ. ಅವರು ನಿನಗೆ ಈಗಾಗಲೇ ಶಿಕ್ಷಣ ಇಲಾಖೆಯಲ್ಲಿ No. EL-3289 Misc 61/77-78 Dated 3-8-78ರ ಆಜ್ಞೆ ಮೇರೆಗೆ ಶಿಕ್ಷಕ ಹುದ್ದೆ ದೊರೆತಿರುವುದಾಗಿ ತಿಳಿಸಿದರು. ಆಗ ಆಶ್ಚರ್ಯ ಚಕಿತನಾಗಿ ನಾನು ಖುಷಿಗೊಂಡೆ.

ಅಂತೆಯೇ ಜನವರಿ 3, 1979ರಂದು ಶಿಕ್ಷಣ ಇಲಾಖೆ ಉಪನಿರ್ದೇಶಕರನ್ನು ಭೇಟಿಮಾಡಿ Appointment order ಕೇಳಿದೆ. ಅದಕ್ಕೆ ಅವರು ಸಿಟ್ಟಿನಿಂದ "ನಿನ್ನ ಮನೆಗೆ ತಂದುಕೊಡಬೇಕಾಗಿತ್ತೆ? ನನ್ನ ಕಚೇರಿಗೆ ಬಂದು ತೆಗೆದುಕೊಂಡು ಹೋಗಬೇಕಾಗಿತ್ತು. ಈಗ ಆ ಬಗ್ಗೆ ನಾನೇನೂ ಮಾಡಲಾರೆ" ಎಂದರು. ಅಂದರೆ ಆಯ್ಕೆಯ ಪಟ್ಟಿಯಿಂದ ನನ್ನ ಹೆಸರನ್ನು ತೆಗೆದುಹಾಕಲಾಗಿತ್ತು. ಮತ್ತೆ ಉದ್ಯೋಗ ವಿನಿಮಯ ಕಚೇರಿಯಲ್ಲಿ ಹೆಸರನ್ನು ನವೀಕರಿಸಿಕೊಳ್ಳಲು "ನಾನು ಸಂದರ್ಶನಕ್ಕೆ ಹಾಜರಾಗಿರಲಿಲ್ಲವೆಂದು ಬರೆದುಕೊಡು" ಎಂದರು. 'ನೀವು ಹೀಗೆ ಹೇಳುತ್ತಿರುವುದನ್ನು ಬರೆದುಕೊಡಿ. ನಂತರ ನಾನು ಬರೆದುಕೊಡುತ್ತೇನೆ' ಎಂದೆ. ಅದಕ್ಕೆ ಅವರು ಸಿಡಿಮಿಡಿಗೊಂಡು ಇಂತಹ ವಿಚಾರಗಳನ್ನು ನನ್ನ ಹತ್ತಿರ ಕೇಳಬೇಡ. ಕೆಳಗಡೆ ಗೆಜೆಟೆಡ್ ಅಸಿಸ್ಟೆಂಟ್ ಕಾಣು ಎಂದರು. ಅಂತೆಯೇ ಅವರನ್ನು ಕಂಡೆ. ಅವರಿಂದ ಸಿಕ್ಕಿದ್ದು 'Get-out' ಉತ್ತರ. ಮತ್ತೆ ಈಗ ನಾನು ಆಯ್ಕೆಯಾದ ಹುದ್ದೆ ಕೊಡುವಂತೆ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರಿಗೆ (ಬೆಂಗಳೂರು ಗ್ರಾಮಾಂತರ) ಪತ್ರ ಬರೆದು ಮನವಿ ಮಾಡಿಕೊಂಡಿದ್ದೇನೆ. ಈವರೆಗೂ ಯಾವ ಉತ್ತರವಿಲ್ಲ. ಆಯ್ಕೆಯಾದ ಹುದ್ದೆಯೂ ಸಿಗದ ಈ ಸರ್ಕಾರೀ ಪವಾಡದ ಬಗ್ಗೆ ತನಿಖೆ ನಡೆಯಬೇಕಾಗಿದೆ. ದಲಿತರ ಕಣ್ಣಿಗೆ ಮಣ್ಣೆರಚುವ ಕೆಲಸ ನಿಲ್ಲಬೇಕಾಗಿದೆ. ಈ ಸಂಬಂಧದಲ್ಲಿ ಸರ್ಕಾರ ಮತ್ತು ಸಾರ್ವಜನಿಕರು ಗಮನ ಹರಿಸಿ ದಲಿತ ನಿರುದ್ಯೋಗಿಗೆ ನಡೆದಿರುವ ಅನ್ಯಾಯ ತಪ್ಪಿಸಿ ನ್ಯಾಯ ದೊರಕಿಸುವ ಯತ್ನ ಮಾಡುವರೆಂದು ಆಶಿಸಲೆ?

—ಅಪ್ಪಾಸ್ವಾಮಿ

ಅಲಸೂರು, ಬೆಂಗಳೂರು

# ಮರಾಠವಾಡ ವಿಶ್ವವಿದ್ಯಾನಿಲಯಕ್ಕೆ ಅಂಬೇಡ್ಕರ್ ಹೆಸರು: ದಲಿತ ಸಾಹಿತ್ಯ ಸಮ್ಮೇಳನದಲ್ಲಿ ಮರುದನಿ

ಮರಾಠವಾಡ ವಿಶ್ವವಿದ್ಯಾನಿಲಯಕ್ಕೆ ಡಾ॥ ಬಿ. ಆರ್. ಅಂಬೇಡ್ಕರ್ ಅವರ ಹೆಸರಿಡಲು ಮಹಾರಾಷ್ಟ್ರ ಸರ್ಕಾರ ವಿಫಲಗೊಂಡಿತು. ತಮ್ಮ ನಾಯಕನ ಹೆಸರಿಡುವ ಬಗ್ಗೆ ನಡೆದ ವಿರೋಧಿ ಚಳವಳಿಯಲ್ಲಿ ಅನೇಕ ದಲಿತರು ಪ್ರಾಣಕಳೆದುಕೊಂಡರು. ಸಹಸ್ರಾರು ಜನರ ಮನೆಗಳಿಗೆ ಬೆಂಕಿಬಿತ್ತು. ಅನೇಕ ಮುಗ್ಧ ಮಹಿಳೆಯರು ಸವರ್ಣೀಯರ ದೌರ್ಜನ್ಯಕಾರರ ಕಾಮಕ್ಕೆ ಬಲಿಯಾದರು. ಆದರೂ ಸುಸಂಘಟನೆಗೆ ಹೆಸರಾದ ಅಲ್ಲಿನ ದಲಿತರು ಮತ್ತೆ ತಲೆ ಎತ್ತಿ ನಿರಂತರ ಹೋರಾಟ ಮುಂದುವರೆಸುತ್ತಿರುವರು.

ಮರಾಠವಾಡ ವಿ.ವಿ.ಗೆ ಡಾ॥ ಬಿ. ಆರ್. ಅಂಬೇಡ್ಕರ್ ಮರಾಠವಾಡ ವಿ.ವಿ. ಎಂದು ಹೆಸರಿಡುವ ಹಿನ್ನ ಹಿಂದಿನ ನಿರ್ಧಾರವನ್ನು ಕಾರ್ಯಗತಗೊಳಿಸಬೇಕೆಂದು ಸರ್ಕಾರದ ಗಮನ ಸೆಳೆಯಲು ಅಲ್ಲಿನ ದಲಿತರು ಈಗ ಮತ್ತೆ ದನಿ ಎತ್ತಿದ್ದಾರೆ.

**ಸಾಹಿತ್ಯ ಸಂಘಟನಾ ಸಮ್ಮೇಳನ**

ಕ್ರಾಂತಿಕಾರಿ ದಲಿತ ಸಾಹಿತ್ಯಕ್ಕೆ ಮಹಾರಾಷ್ಟ್ರ ಹೆಸರು. ಜನವರಿ 27 ಮತ್ತು 28ರಂದು ದಲಿತ ಸಾಹಿತ್ಯ ಸಮ್ಮೇಳನವು ಔರಂಗಾಬಾದ್‌ನಲ್ಲಿ ನಡೆಯಿತು. ಸಾಹಿತ್ಯ ಸಮ್ಮೇಳನದ ಜತೆಗೆ ಸಂಘಟನಾ ಸಮ್ಮೇಳನ ಮಿಲನಗೊಂಡಿತ್ತು. ಮರಾಠವಾಡ ವಿ.ವಿ. ಪುನರ್‌ನಾಮಕರಣ ನಿಲುವು ಅಚಲಗೊಳಿಸಬೇಕೆಂಬುದು ಸಮ್ಮೇಳನದ ನಿರ್ಣಯಗಳಲ್ಲಿ ಪ್ರಧಾನವಾದದ್ದು. ಇತರೆ ನಿರ್ಣಯಗಳು:

1) ಮರಾಠವಾಡ ವಿ.ವಿ.ಗೆ ಅಂಬೇಡ್ಕರ್ ಪುನರ್ ನಾಮಕರಣಕ್ಕೆ ಒತ್ತಾಯ.

2) ಮಹಾರಾಷ್ಟ್ರದಲ್ಲಿ ಇತ್ತೀಚೆಗೆ ನಡೆದ ದಲಿತರ ಮೇಲಿನ ಅಮಾನುಷ್ಯ ದೌರ್ಜನ್ಯಗಳ ಬಗ್ಗೆ ನ್ಯಾಯಾಂಗ ತನಿಖೆ.

3) ಖಾಸಗಿ ಭೂಮಿ ರಾಷ್ಟ್ರೀಕರಣ ಆಗಬೇಕು.

4) ದಲಿತರಿಗೆ ಹುದ್ದೆ ಮೀಸಲಾತಿ ಮುಂದುವರಿಯಬೇಕು.

5) ದೇವರುಗಳನ್ನು ಪೂಜಿಸುವ ಮತ್ತು ಬೆಂಬಲಿಸುವ ಪ್ರವೃತ್ತಿಯನ್ನು ಸರ್ಕಾರ ಕೈಬಿಡಬೇಕು.

ಮೂರನೇ ದಲಿತ ಸಾಹಿತ್ಯ ಸಮ್ಮೇಳನ ಮುಕ್ತಾಯದ ಅಧ್ಯಕ್ಷತೆಯನ್ನು ಖ್ಯಾತ ಹಿಂದಿ ಸಾಹಿತಿ ಕಮಲೇಶ್ವರ್ ಅವರು ವಹಿಸಿದ್ದರು. ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಅನ್ಯಾಯಗಳಿಗೆ ತುತ್ತಾದ ಲಕ್ಷಾಂತರ ದಲಿತರ ಬದುಕನ್ನೂ ಕನಸುಗಳನ್ನೂ ಮರಾಠಿ ದಲಿತ ಸಾಹಿತ್ಯ ಪ್ರತಿಬಿಂಬಿಸುತ್ತದೆ ಎಂದು ಶ್ಲಾಘಿಸಿದರು.

ತಾವು ಅನುಭವಿಸಿದ ಬಾಳು-ಬದುಕನ್ನು ದಲಿತ ಸಾಹಿತಿಗಳು ತಮ್ಮ ಬರವಣಿಗೆಯಲ್ಲಿ ಪುಟಿಸಿದ್ದಾರೆ. ಆದ್ದರಿಂದ ಅದು ಸಕ್ರಿಯ ಹಾಗೂ

[4ನೇ ಪುಟನೋಡಿ]

# ತರಬೇತಿ ಶಿಬಿರ ಒಂದು ಕಮಿಟ್‌ಮೆಂಟ್ ಕಸರತ್ತು

ಜನವರಿ ತಿಂಗಳು 16ನೇ ತಾರೀಖಿನಿಂದ 21ನೇ ತಾರೀಖಿನವರೆವಿಗೆ ತುಮಕೂರು ಜಿಲ್ಲೆಯಲ್ಲಿ ದಲಿತಕಾರ್ಯಕರ್ತರ ತರಬೇತಿ ಶಿಬಿರ ನಡೆಯಿತು. ಅನೊಂದು ಮರೆಯಲಾಗದ ಘಟನೆ. ಶಿಬಿರದಲ್ಲಿ ಪಾಲುಗೊಂಡಿದ್ದ ಉಪನ್ಯಾಸಕರು ಮತ್ತು ಶಿಬಿರಾರ್ಥಿಗಳಲ್ಲಿ ಎದ್ದು ಕಾಣುತ್ತಿದ್ದ ಮುಖ್ಯ ಗುಣ ಕಮಿಟ್‌ಮೆಂಟ್. ಇದು ಇವತ್ತಿನ ಯುವಜನರಲ್ಲಿ ಅಪರೂಪ.

ದಲಿತ ಸಂಘರ್ಷ ಸಮಿತಿಯ ಚಟುವಟಿಕೆಗಳು ಈ ಶಿಬಿರದಿಂದ ಹೊಸ ತಿರುವನ್ನು ಪಡೆದು ಕೊಂಡಿವೆ. ಇಲ್ಲಿಯವರೆವಿಗೂ ಸಮ್ಮೇಳನ ಮೆರವಣಿಗೆಗಳಲ್ಲಿಯೇ ಮುಳುಗಿಹೋಗಿದ್ದ ದಲಿತ ಕಾರ್ಯಕರ್ತರಿಗೆ ಹೊಸ ಕಾರ್ಯಕ್ರಮವೊಂದು ಹೊಳೆದಿದೆ. ಅದೆಂದರೆ ಅಧ್ಯಯನ ಶಿಬಿರಗಳು. ಇಲ್ಲಿ ಅನೇಕ ವಿಚಾರಗಳನ್ನು ಮುಕ್ತವಾಗಿ ಚರ್ಚಿಸಲು ಸಾಧ್ಯವಾಯಿತು. ಎಷ್ಟೋ ಹೊಸ ವಿಚಾರಗಳನ್ನು ಕಲಿಯಲು ಅನುಕೂಲವಾಯಿತು.

ಇಂದಿನ ಸಂದರ್ಭದಲ್ಲಿ ದಲಿತ ಕಾರ್ಯಕರ್ತರುಗಳು ಇಂಡಿಯಾದ ಸಮಾಜವ್ಯವಸ್ಥೆಯನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಬೇಕಾಗಿದೆ. ಆಗ ಮಾತ್ರ ಇದನ್ನು ಬದಲಾಯಿಸುವ ಆಲೋಚನೆಗಳನ್ನು ಮಾಡಲು ಸಾಧ್ಯ. ಇಂಥ ಒಂದು ಉಪಯುಕ್ತವಾದ ಕೆಲಸ ಈ ಅಧ್ಯಯನ ಶಿಬಿರದಿಂದ ಆಗಿದೆ. ಎಡಪಕ್ಷಗಳು ನಮ್ಮ ಗೆಳೆಯರು ಎಂಬ ತಿಳುವಳಿಕೆಯ ಬೆಳವಣಿಗೆ ಆಗಿದ್ದು ಈ ಶಿಬಿರದ ಇನ್ನೊಂದು ಪ್ರಯೋಜನ.

ಮುಂಜಾನೆಯಲ್ಲಿ ಎದ್ದು ನಡೆಸಿದ ಕವಾಯಿತುಗಳು ಕಾರ್ಯಕರ್ತರಲ್ಲಿ ಶಿಸ್ತನ್ನು ಹೆಚ್ಚಿಸಲು ಸಹಾಯಕವಾಯಿತು. ಇದನ್ನು ಎಲ್ಲ ಶಾಖೆಗಳೂ ಆರಂಭಿಸುವುದು ಒಳ್ಳೆಯದು. ಹಾಡಿದ ಹಾಡುಗಳು ಮಾಡಿದ ನಾಟಕಗಳು ಇವೆಲ್ಲ ದಲಿತ ಕ್ರಾಂತಿಯ ಭಾವನೆಯನ್ನು ಬಲಪಡಿಸಿದವು. ಈ ಶಿಬಿರದಲ್ಲಿ ನಮ್ಮ ಜೊತೆಗೂಡಿದ ಎಡಪಕ್ಷಗಳು ಮತ್ತು ಎಡ ಸಾಂಸ್ಕೃತಿಕ ತಂಡಗಳು ದಲಿತರಿಗೆ ಹೆಚ್ಚು ನಿಕಟವಾದವು.

ಶಿಬಿರದಲ್ಲಿ ಭಾಗವಹಿಸಿ ಈಗ ಸಿದ್ಧಾಂತದ ಶಕ್ತಿಯನ್ನು ಸಂಪಾದಿಸಿರುವ ನಮ್ಮ ಕಾರ್ಯಕರ್ತರು ಹೆಚ್ಚು ಕ್ರಿಯಾಶೀಲರಾಗಬೇಕು. ಹಳ್ಳಿ, ಹೋಬಳಿ, ತಾಲ್ಲೂಕು ಮಟ್ಟದಲ್ಲಿ ದಲಿತರ ಸಮಸ್ಯೆಗಳನ್ನು ಎತ್ತಿಕೊಂಡು ಹೋರಾಟಮಾಡಬೇಕು. ಜನಸಂಘಟನೆಗಳನ್ನು ಬಲಪಡಿಸಿ ದಲಿತ ಕ್ರಾಂತಿ ಮುನ್ನಡೆಯಲು ಹೆಚ್ಚು ಸಮಯವನ್ನು ಮೀಸಲಿಡಬೇಕು. ಕೇವಲ ಹಾಡು, ನಾಟಕಗಳನ್ನು ಹಾಡಿದರೆ ಕ್ರಾಂತಿ ಸಂಭವಿಸುವುದಿಲ್ಲ. ಜನಸಂಘಟನೆಯನ್ನು ಕಟ್ಟಿ ಹೋರಾಟ ಮಾಡಿದರೆ ಮಾತ್ರ ಅದಕ್ಕೆ ಅರ್ಥವಿದೆ. ಆದ್ದರಿಂದ ನಮ್ಮ ಹಾಡು, ನಾಟಕ ಜನ ಹೋರಾಟಕ್ಕೆ ಪೂರಕವಾಗಲಿ.

ದಲಿತ ಕಾರ್ಯಕರ್ತರು ಹೆಚ್ಚು ಹೆಚ್ಚು ಎಡ ಸಿದ್ಧಾಂತಗಳನ್ನು ಅಧ್ಯಯನ ಮಾಡಬೇಕು. ಅನುಭವದಿಂದ ಅರಿತುಕೊಳ್ಳಬೇಕು. ಸಂಘಟನೆಯಲ್ಲಿ ತೊಡಗಬೇಕು ಎಂಬುದನ್ನು ತುಮಕೂರು ಶಿಬಿರ ಹೇಳಿಕೊಟ್ಟಿದೆ.

# ಸೂರ್ಯ ಹುಟ್ಟುವ ಮುನ್ನ

ಮೈ ತೆರೆದು ಮಲಗಿರುವ ಮುರುಕು ಮನೆ
ಒಳಗೆ ಮೈ ಮುಚ್ಚಿ ಮಲಗಿ ಉದ್ದಕೆ
ನಾ ನಿದ್ದೆ ಮಾಡಿದ್ದೆ

ಅದೆಂದೊ ಎದ್ದಿದ್ದ ಬಿರುಗಾಳಿ
ಗುಪ್ಪನೆ ಕುಂತಿದ್ದ ನನ್ನ ಮನೆ ಮಯ್ಯ
ಚರ್ಮ ಹರಿದು ತೂತು ಮಾಡಿತ್ತು.
ಅಪ್ಪ ಅದ ಮುಚ್ಚಿರಲಿಲ್ಲ
ನಾ ಮುಚ್ಚಲೇ ಇಲ್ಲ

ಹಗಲು ನೀಲ ಮುಗಿಲು ರಾತ್ರಿ ಗಂಪ್ನನೆಯ ಕರಿಬಾಣ
ಜೊತೆಗೆ ಅಲ್ಲೊಂದಿಲ್ಲೊಂದು ತಾವರೆ ಹಕ್ಕಿ ನೋಡುತ್ತಾ
ನೋಡುತ್ತಾ ಕಲ್ಲಂತೆ ನಿಲ್ಲುವುದು ಕೂರುವುದು ಹಾಗೇ
ಅಂತು ಮಲಗುವುದು ರೂಢಿಯಾಗಿ
ಕಾಳ ರಾತ್ರಿಯ ತಾವರೆಹಕ್ಕಿಗೆ ಕಣ್ಣ ನೇರ ಹಿಡಿದಿಡಿದು
ಕಣ್ಣೀರು ಬೊಳ ಬೊಳ........
ಅತ್ತದ್ದಷ್ಟೇ ನೆನಪು

ಸಮ ರಾತ್ರಿ
ಸತ್ತ ಬರಿ ಮೂಳೆ ಚಕ್ಕಳದ ಅಪ್ಪ ದಿಗ್ಗನೆದ್ದು
ದಡದಡನೆ ಮನೆ ತುಂಬೆಲ್ಲಾ ಓಡಾಡಿ ಹುಡುಕಾಡಿ
ಮಚ್ಚು ಮಚ್ಚು ಅಂತೆಲ್ಲ ಕೂಗಾಡಿದ ಥರ
ಮಚ್ಚಿಡಿದು ಕೆಂಪು ಕಣ್ಣಲಿ ಕೇಕೆ ಹಾಕಿ
ಗೌಡನ ದೊಡ್ಡಟ್ಟಿ ಕಡೆ ದಿಡಿದಿಡಿ
ಓಡಿದ ಥರ

ಅಪ್ಪ ಮುಂದೆ ನಾಹಿಂದೆ ಓಡೋಡುತ್ತಾ ನೋಡಿದೆ
ಬೌ ಎಂದ ನಾಯ ಸಿಗಿದು ಹಾಕಿದ ಅಪ್ಪ
ಗೌಡನ ದೊಡ್ಡಟ್ಟಿ ನುಗ್ಗಿದ

ಹಟ್ಟಿ ತುಂಬೆಲ್ಲ ಸದ್ದುಗದ್ದಲ ಯಾರೊಹಾ ಅಂದ ಥರ
ಹೊರಗೆ ಅವ್ವನ ಕತ್ತಿಗಗ್ಗ ಬಿಗಿದು ನೇತಾಡಿದ್ದ
ಆಲದ ಮರದಡಿ ನಾ ಲಬೊ ಲಬೊ
ಅಳುತ್ತಿದ್ದಾಗ
ಮಚ್ಚಿಡಿದು ಹೊರಬಂದ ಅಪ್ಪನ ಮೈಯ್ಯ ತುಂಬೆಲ್ಲ
ರಕ್ತದ ಕೋಡಿ ನೋಡಿ
ಓಡೋಡಿ ಅಪ್ಪಿದೆ
ಕಟಕಟ ಹಲ್ಲು ಕಡಿದ ಅಪ್ಪ ಜಾಡಿಸಿ ಒದ್ದು
'ನಿಮ್ಮವ್ವ.... ಗೌಡ....' ಅನ್ನುತ್ತಾ
ರಪರಪ ಮಚ್ಚು ಬೀಸುತ್ತಿದ್ದ
ಕೆಂಪು ರಕ್ತ ಚಿಲಿ ಚಿಲಿ ಹರಿದು
ಅರ್ಧ ಆಲದ ಮರದ ಕಡೆ ಇನ್ನರ್ಧ ದೊಡ್ಡಟ್ಟಿ
ಬಾಗಿಲ ಕಡೆ ಹೆಪ್ಪು ಕಟ್ಟುತ್ತಿತ್ತು

ಸೂರ್ಯ ಹುಟ್ಟಿರಲಿಲ್ಲ
ಹಟ್ಟಿ ಎದುರ ಪಾಳುಗುಡಿ ಪಕ್ಕ
ಹರಡಿ ಹೆಪ್ಪು ಕಟ್ಟಿದ ಕೆಂಪು ರಕ್ತದ ಮೇಲೆ
ಸುಲಿವ ಕುಯ್ಯು ತರಿವ ನನ್ನವರ ಮಧ್ಯೆ ಗೌಡ !
ಮೀಸೆ ನಗುತ್ತಿತ್ತು. 'ತಿನ್ನೊ ಬಡ್ಡೆತ್ತವ ಮಾರಿದ್ರರೆ
ಮುನ್ನೂರಾಗುತ್ತಿತ್ತು ದನ' ಎಂದದ್ದಕ್ಕೆ
'ಎಲ್ಲಾ ನಿಮ್ಮ ದಯ, ಎಂದವರ ನೋಡಿ
ಕತ್ತು ಠೀವಿ ಮಾಡುತ್ತಿತ್ತು

ತಲೆ ದಿಂಬಲ್ಲಿ ಮಡಿಗಿದ್ದ ಮಚ್ಚು
ಕೈಗೆ ಸಿಕ್ಕಾಗ ಸೂರ್ಯ ಪೂರ್ತಿ
ಪೂರ್ತಿ ಕೆಂಪಾಗಿದ್ದ

—ಎಚ್. ಗೋವಿಂದಯ್ಯ

## ಮರಾಠವಾಡ......

[3ನೇ ಪುಟದಿಂದ]

ಸಾಮೂಹಿಕ, ಇಂತಹ ಸಾಹಿತ್ಯ ಸೃಷ್ಟಿಯು ಎಲ್ಲಾ ಭಾಷೆಗಳಲ್ಲೂ ಆಗಬೇಕು. ಆದಾಗ ಮಾತ್ರ ಈ ದೇಶದಲ್ಲಿ ದಲಿತ ಚಳುವಳಿ ಜೀವಂತವಾಗುವುದು ಎಂದು ಅವರು ಹೇಳಿದರು.

ದಲಿತ ಪ್ಯಾಂಥರ್ಸ್ ಚಳುವಳಿಯ ಮುಂಚೂಣಿಯಲ್ಲಿರುವ ನೂರಾರು ಬಂಡುಕೋರ ಬರಹಗಾರರು ಸಮ್ಮೇಳನದಲ್ಲಿ ಭಾಗವಹಿಸಿದ್ದರು.

# ಸಿದ್ಲಿಪುರ ಹೋರಾಟ...

[ಒಂದನೇ ಪುಟದಿಂದ]

ತೋರಿಸಿ, ಊರಿನ ಪಂಚಾಯಿತಿ ಛೇರ್ಮನ್ ಮೂಲಕ ಭೂಮಿಯನ್ನು ಕಬಳಿಸಿದರು. ಆದರೆ ಭೂಪಾಳಂ ಆಶ್ವಾಸನೆಯ ಪ್ರಕಾರ ನಡೆದುಕೊಳ್ಳಲಿಲ್ಲ. ಹರಿಜನರಿಗೆ ಬೇರೆ ಕಡೆ ಭೂಮಿ, ಹಣ ಎರಡೂ ದಕ್ಕಲಿಲ್ಲ, ಬದಲಾಗಿ ಭೂಪಾಳಂ ಹಂತ ಹಂತವಾಗಿ ಭೂಮಿಯನ್ನು ತನ್ನ ಹೆಸರಿಗೆ ರಿಜಿಸ್ಟರ್ ಮಾಡಿಸಿಕೊಂಡ.

ಈ ತೋಟಿ ತಳವಾರಿ ಉಂಬಳಿ ಅಥವಾ ಇನಾಮತಿ ಭೂಮಿಯ ಸ್ವಭಾವವೆಂದರೆ, ಅದನ್ನು ಹರಿಜನರು ಮತ್ತೊಬ್ಬರಿಗೆ ಮಾರುವ ಹಾಗೆಯೂ ಇಲ್ಲ, ಇನ್ನೊಬ್ಬರು ಅದನ್ನು ಕೊಂಡುಕೊಳ್ಳುವ ಹಾಗೆಯೂ ಇಲ್ಲ. ಭೂಮಿ ಸರ್ಕಾರದ ವಶದಲ್ಲಿಯೇ ಇದ್ದು ಇಂತಿಷ್ಟು ವರ್ಷಕ್ಕೆ ಎಂದು ಹರಿಜನರಿಗೆ ಗ್ರಾಂಟ್ ಮಾಡುತ್ತ ಹೋಗುತ್ತದೆ. ಆಗಾಗ್ಗ ಹರಿಜನರು ಅದನ್ನು ರೀಗ್ರಾಂಟ್ ಮಾಡಿಸಿಕೊಳ್ಳುತ್ತಿರಬೇಕು. ಭೂಪಾಳಂ ಇಂಥ ಅವ್ಯವಹಾರ ಮಾಡಿದ ಕಾಲಕ್ಕೆ ಹರಿಜನರು ರೀಗ್ರಾಂಟ್‌ಗಾಗಿ ಸರ್ಕಾರಕ್ಕೆ ಅರ್ಜಿ ಬರೆದುಕೊಂಡಿದ್ದರು. ಒಂದು ಕಡೆ ಭೂಪಾಳಂ ತಾನು ಭೂಮಿ ಕೊಂಡಿದ್ದೇನೆಂದು ಹೇಳುತ್ತ, ಮತ್ತೊಂದು ಕಡೆ ಅಸ್ಪೃಶ್ಯರು ರೀಗ್ರಾಂಟ್‌ಗಾಗಿ ಅರ್ಜಿ ಸಲ್ಲಿಸುತ್ತಿದ್ದ ಸಂದಿಗ್ಧ ಪರಿಸ್ಥಿತಿಯಲ್ಲಿ ಈ ತಗಾದೆ ಡಿಸ್ಟ್ರಿಕ್ಟ್ ಕೋರ್ಟನ್ನು ಮುಟ್ಟಿತು. ಡಿಸ್ಟ್ರಿಕ್ಟ್ ಕೋರ್ಟು ಭೂಪಾಳಂ ಪರವಾಗಿ ತೀರ್ಪನ್ನು ಮುಟ್ಟಿತು. ತರುವಾಯ ಈ ತಗಾದೆಯು ಹೈಕೋರ್ಟನ್ನು ಮುಟ್ಟಿ, "ಹಾಲಿ ಭೂಮಿಯನ್ನು ಹರಿಜನರಿಗೆ ಮಂಜೂರು ಮಾಡಿಕೊಡುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿ" ಹೈಕೋರ್ಟು ತೀರ್ಪನ್ನು ಕೊಟ್ಟಿತು. ಈ ತೀರ್ಪನ್ನು ಸಂಬಂಧಪಟ್ಟ ಅಧಿಕಾರಿಗಳು ಭೂಪಾಳಂನಿಂದ ಲಂಚಹೊಡೆದು ಮುಚ್ಚಿ ಹಾಕಿದರು.

**ಜೈಲು–ಜಾಥಾ**

ಹರಿಜನರ ಇಂಥ ಅಸಹಾಯಕ ಸ್ಥಿತಿಯಲ್ಲಿ ದ. ಸ. ಸ. ತನ್ನ ಹೋರಾಟ ಆರಂಭಿಸಿತು. ಭೂಪಾಳಂ ಅಕ್ರಮ ಸಾಗುವಳಿದಾರನೆಂದು ಆರೋಪಿಸಿ ಅವನು ಬೆಳೆದಿದ್ದ ಕಬ್ಬನ್ನು ಕಡಿಯತೊಡಗಿದರು. ಪೋಲೀಸರು ಅವರನ್ನು ಬಂಧಿಸಿದರು. ಹೆಣ್ಣುಮಕ್ಕಳೂ ನಿರ್ಭಯವಾಗಿ ಹೋರಾಡಿ ಜೈಲು ಕಂಡರು. ಭೂಪಾಳಂನ ಅಕ್ರಮ ಸಾಗುವಳಿಯನ್ನು ವಿರೋಧಿಸಿ ಭದ್ರಾವತಿಯಿಂದ ಶಿವಮೊಗ್ಗಗೆ ಕಾಲುನಡಿಗೆ ಜಾಥಾ ತೆಗೆದರು. ಜಾಥಾದಲ್ಲಿ ಸಿದ್ಲಿಪುರ ಹರಿಜನರ ಪರವಾಗಿ ಸುಮಾರು 20 ಹಳ್ಳಿಯ ದಲಿತರು ಪಾಲ್ಗೊಂಡಿದ್ದರು. ಇದಾದ ತರುವಾಯ ಸೈಕಲ್ ಜಾಥಾವನ್ನೂ ಏರ್ಪಡಿಸಲಾಯಿತು. ಇಷ್ಟಾದರೂ ಅಧಿಕಾರಿಗಳು ಮೌನ ತಾಳಿದರು. ಪರಿಣಾಮವಾಗಿ ದ.ಸ.ಸ. ಭದ್ರಾವತಿ ಶಾಖೆಯು ತಾಲ್ಲೂಕು ಕಚೇರಿ ಮುಂದೆ ಅಕ್ರಮ ಸಾಗುವಳಿ ವಿರೋಧಿಸಿ ತಾ॥ 21–11–77ರಿಂದ ಅನಿರ್ದಿಷ್ಟಕಾಲದ ಉಪವಾಸ ಸತ್ಯಾಗ್ರಹವನ್ನು ಆರಂಭಿಸಿತು.

ಈ ಹೋರಾಟದ ಪರಿಣಾಮವಾಗಿ ಸರಕಾರವು 1978ರ ಜೂನ್ ತಿಂಗಳಿನಂದು, ವಿಶೇಷ ಆಜ್ಞೆಯೊಂದನ್ನು ಹೊರಡಿಸಿ "1975ರಿಂದ ಈಚೆಗೆ ಯಾವನೇ ವ್ಯಕ್ತಿ ಹರಿಜನರಿಂದ ಉಂಬಳಿ ಭೂಮಿಯನ್ನು ಅಕ್ರಮವಾಗಿ ಸ್ವಾಧೀನ ಪಡಿಸಿಕೊಂಡಿದ್ದರೆ, ಕೂಡಲೇ ಅವರಿಂದ ಭೂಮಿ ತೆರವು ಮಾಡಿಸಿ, ಹರಿಜನರಿಗೆ ಹಂಚತಕ್ಕದ್ದು'' ಎಂದು ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಿತು. ಇಂಥ ತುರ್ತು ಆಜ್ಞೆಯಿಂದ ಕರ್ನಾಟಕದಾದ್ಯಂತ ಎರಡೂವರೆ ಲಕ್ಷ ಎಕರೆ ಭೂಮಿ ಪುನಃ ಹರಿಜನರಿಗೆ ಸೇರುತ್ತದೆಂದು ಸರ್ಕಾರದ ಅಂಕಿಅಂಶ ತಿಳಿಸುತ್ತದೆ. ಇದು ದ. ಸ. ಸ. ಹೋರಾಟದ ಫಲ.

**ವಿಶೇಷ ಆಜ್ಞೆ–ಗ್ರಾಂಟ್ ರದ್ದು**

ಈ ಮಧ್ಯೆ ಇಂಥ ತಗಾದೇ ನಡೆಯುತ್ತಿರುವಾಗಲೇ ಭೂಪಾಳಂ ಸಹೋದರರು ಆಗ ಇದ್ದ ಅಸಿಸ್ಟೆಂಟ್ ಕಮೀಷನರ್ ಶ್ರೀ ವೆಂಕಟೇಶ ಅವರನ್ನು ತಮ್ಮ ದುಡ್ಡಿನ ಬುಟ್ಟಿಗೆ ಹಾಕಿಕೊಂಡು "ತಾವು ಹರಿಜನರ ಭೂಮಿಯಲ್ಲಿ ವಿಶೇಷ ಬೀಜ ತಳಿ ಕೇಂದ್ರವನ್ನು ಸ್ಥಾಪಿಸಿರುವುದಾಗಿಯೂ, ಅದಕ್ಕಾಗಿ ಅಪಾರಹಣ ಖರ್ಚು ಮಾಡಿರುವುದಾಗಿಯೂ, ಹೇಳಿಕೊಂಡು" ಹಾಲಿ ಭೂಮಿಯನ್ನು 1977 ರಲ್ಲಿ ಗ್ರಾಂಟ್ ಮಾಸಿಡಿಕೊಂಡು ಬಿಟ್ಟಿದ್ದರು. ಹೈಕೋರ್ಟ್ ಆಜ್ಞೆಯನ್ನು ಉಲ್ಲಂಘಿಸಿ ಅಸಿಸ್ಟೆಂಟ್ ಕಮೀಷನರ್ ಭೂಮಿ ಗ್ರಾಂಟ್ ಮಾಡಿಸಿಕೊಟ್ಟಿದ್ದ. ಅದರೆ ಯಾವಾಗ ವಿಶೇಷ ಆಜ್ಞೆ ಹೊರಟಿತೋ, ಅದೇ ಅಸಿಸ್ಟೆಂಟ್ ಕಮೀಷನರ್ ಗ್ರಾಂಟ್ ಆಜ್ಞೆಯನ್ನು ರದ್ದುಗೊಳಿಸಿಬಿಟ್ಟ. ಇನ್ನೇನು ಭೂಮಿ ರೀ ಗ್ರಾಂಟ್ ಮಾಡಬೇಕು ಎನ್ನುವಷ್ಟರಲ್ಲಿಯೇ ಭೂಪಾಳಂ "ಆಸ್ತಿಯ ಮೂಲಭೂತ ಹಕ್ಕಿನ ಬಗ್ಗೆ ತಡೆಯಾಜ್ಞೆಯನ್ನು' ಹೈಕೋರ್ಟಿನಿಂದ ತಂದಿದ್ದಾನೆ. ಆದರೆ ಕರ್ನಾಟಕ ಸರ್ಕಾರವು ಆ ಬಗ್ಗೆ ಮತ್ತೊಂದು ವಿಶೇಷ ಆಜ್ಞೆಯನ್ನು ಹೊರಡಿಸುವುದರಲ್ಲಿದೆ ಎಂದು ತಿಳಿದು ಬಂದಿದೆ. ಆ ಪ್ರಕಾರ ಹರಿಜನರ ಭೂಮಿ ಪುನಃ ಅವರಿಗೆ ಸಿಕ್ಕುವುದರಲ್ಲಿ ಸಂದೇಹವಿಲ್ಲ. ಆದರೆ ಶಿವಮೊಗ್ಗ ವಿಶೇಷ ಜಿಲ್ಲಾಧಿಕಾರಿಗಳು ಕೋರ್ಟಿನಲ್ಲಿರುವ ಕೇಸು ತೀರ್ಮಾನವಾಗುವವರೆಗೂ ಸಿದ್ಲಿಪುರ ಹರಿಜನರಿಗೆ ತಲಾ 1 ಎಕರೆ ನೀರಾವರಿ ಭೂಮಿ ಕೊಡುವ ಭರವಸೆ ನೀಡಿದ್ದರಿಂದ ಒಂದು ವರ್ಷದ ನಂತರ ಅಂದರೆಕಳೆದ ಡಿಸೆಂಬರ್‌ನಲ್ಲಿ ಸತ್ಯಾಗ್ರಹವನ್ನು ವಾಪಸು ತೆಗೆದುಕೊಳ್ಳಲಾಯಿತು,

**ಸಿದ್ಲಿಪುರ ಹೋರಾಟದ ಲಾಭಗಳು**

1) ಸಿದ್ಲಿಪುರ ಹರಿಜನರಿಗೆ ಅವರ 33 ಎಕರೆ ಇನಾಮತಿ ಭೂಮಿ ಸಿಕ್ಕಿದುದರ ಜೊತೆಗೆ ಪ್ರತಿ ಕುಟುಂಬಕ್ಕೂ ಒಂದು ಎಕರೆ ನೀರಾವರಿ ಭೂಮಿ ಹೆಚ್ಚು ದೊರಕಿದ್ದು.

2) ಕರ್ನಾಟಕದಾದ್ಯಂತ ಅವ್ಯವಹಾರಕ್ಕೆ ಒಳಗಾಗಿದ್ದ $2\frac{1}{2}$ ಲಕ್ಷ ಎಕರೆ ಇನಾಮತಿ ಭೂಮಿ ಪುನಃ ಹರಿಜನರಿಗೆ ದೊರಕುವುದು.

3) ದಲಿತರಲ್ಲಿ ಅರ್ಜಿ ಬರೆಯುವ, ಅಧಿಕಾರಿಗಳಿಗೆ ಅಡ್ಡಬೀಳುವ ಪ್ರವೃತ್ತಿ ಹೊರಟು ಹೋಗಿ ಹಕ್ಕಿಗಾಗಿ ಹೋರಾಡುವ, ಮತ್ತು ಹೋರಾಟದಿಂದಲೇ ಏನನ್ನಾದರೂ ಗಳಿಸಲು ಸಾಧ್ಯ ಎಂಬ ದಿಟ್ಟ ಪ್ರವೃತ್ತಿ ಬೆಳೆದದ್ದು.

---

## ಕರಾಳ ದಿನಾಚರಣೆ

[ಒಂದನೇ ಪುಟದಿಂದ]

ಭಾಷಣಕಾರರಾಗಿ ಶ್ರೀ ಶಿವಲಿಂಕಾರಯ್ಯ ಮಾತಾಡಿದರು. "ದಲಿತರ ಹೆಸರಿನಲ್ಲಿ ಅಧಿಕಾರಕ್ಕೆ ಬಂದವರು ಮೂವತ್ತು ವರ್ಷಗಳಿಂದಲೂ ದಲಿತೋದ್ಧಾರ ಹೇಳಿದರೂ ಯಾಕೆ ಸರ್ಕಾರಿ ಹುದ್ದೆಯಲ್ಲಿ ಒಂದನೇ ಎರಡನೇ ದರ್ಜೆಯಲ್ಲಿ ಶೇಕಡಾ 5 ಜನ ಮಾತ್ರ ಹಾಗೂ ಮೂರನೇ ದರ್ಜೆಯಲ್ಲಿ ಶೇಕಡಾ 8 ಜನರು ಮಾತ್ರ ಉದ್ಯೋಗದಲ್ಲಿ ಇರುವರು" ಎಂದು ಪ್ರಶ್ನಿಸಿದರು. ನಂತರ ಕಪ್ಪು ಬ್ಯಾಡ್ಜ್ ಧರಿಸಿ ಕಪ್ಪು ಬಾವುಟ ಹಿಡಿದು ದಲಿತರು ಊರಿನ ಮುಖ್ಯ ಬೀದಿಗಳಲ್ಲಿ ಪ್ರತಿಭಟನಾ ಮೆರವಣಿಗೆ ನಡೆಸಿದರು.

# ಪೌರಕಾರ್ಮಿಕರು ಮತ್ತು ಜಾತೀಯತೆ

ವ್ಯವಸ್ಥಿತ ನಗರ ನಿರ್ಮಲೀಕರಣ ಯಾವ ಕಾಲದಲ್ಲಿ ಪ್ರಾರಂಭವಾಯಿತೆಂಬುದನ್ನು ನಿರ್ಧಿಷ್ಟವಾಗಿ ಹೇಳಲಾಗದು. ಆದರೆ ನಗರ ಊರುಗಳು ಬೆಳೆದಂತೆಲ್ಲ ಅವುಗಳನ್ನು ಸ್ವಚ್ಛ ಮಾಡುವ ಕೆಲಸ ಹರಿಜನರ ಪಾಲಿಗೆ ಬಂತು. ಅದಕ್ಕೆ ಕಾರಣ ನಮ್ಮ ದೇಶದಲ್ಲಿ ಇಂದೂ ಇರುವ ಜಾತಿ, ವರ್ಗಪದ್ಧತಿ. ಬೀದಿ ಗುಡಿಸುವುದು, ಹೇಸಿಗೆ ತೆಗೆಯುವ ಕೆಲಸಕ್ಕೆ ಉತ್ತಮ ಕುಲಗಳಿಗೆ ಸೇರಿದವರಾರೂ ಒಪ್ಪದಿದ್ದುದರಿಂದ, ಅನಾದಿ ಕಾಲದಿಂದಲೂ ಉತ್ತಮ ಕುಲದವರ ಗುಲಾಮರೆಂದು ಪರಿಗಣಿಸಲ್ಪಟ್ಟಿದ್ದ ಅಸ್ಪೃಶ್ಯರು ಈ ಕೆಲಸ ಕೈಗೊಳ್ಳುವಂತೆ ಮಾಡಲಾಯಿತು. ಜೀವನೋಪಾಯಕ್ಕೆ ಆ ಕೆಲಸ ಮಾಡದೆ ಇರಲು ಆ ಅಸ್ಪೃಶ್ಯರಿಗೆ ಬೇರೆ ಗತ್ಯಂತರವೇ ಇರಲಿಲ್ಲ.

ತಮ್ಮದೆಂಬುದಾದ ಆಸ್ತಿಪಾಸ್ತಿಯಿಲ್ಲದಿದ್ದ ಅಸ್ಪೃಶ್ಯರು ಜೀವಿಸಬೇಕಾದ್ದಲ್ಲಿ ಪಟ್ಟಣ ಅಥವಾ ನಗರಗಳಿಗೆ ವಲಸೆ ಹೋಗಬೇಕಾಯಿತು. ಉತ್ತಮ ಕುಲದವರೆಂದು ಹೇಳಿಕೊಳ್ಳುವವರು ಯಾವುದೇ ಕೆಲಸ ಹೇಳಿದರೂ ಮಾಡಬೇಕಾಗಿದ್ದಿತು. ಈ ರೀತಿಯಾಗಿ ನಗರ ನಿರ್ಮಲೀಕರಣ ಕೆಲಸ ಮಾಡಲು ಪ್ರಾರಂಭಿಸಿದ ಅಸ್ಪೃಶ್ಯರ ಒಂದು ವರ್ಗ ಅದನ್ನೇ ಕುಲಕಸುಬಾಗಿ ಮುಂದುವರೆಸಿಕೊಂಡು ಬಂದು, ಕಾಲಕ್ರಮೇಣ ತಾನೇ ಒಂದು ಪ್ರತ್ಯೇಕ ವರ್ಗವಾಗಿ ಮಾರ್ಪಟ್ಟಿತು. ವಲಸೆ ಹೋಗದೆ ಹಳ್ಳಿಗಳಲ್ಲಿ ಉಳಿದು ಕೊಂಡ ಅಸ್ಪೃಶ್ಯರು ವ್ಯವಸಾಯದ ಕೂಲಿಯಾಳುಗಳಾಗಿ, ಚರ್ಮ ಹದ ಮಾಡುವ ಕೆಲಸದವರಾಗಿ, ಇನ್ನೂ ಅನೇಕ ವರ್ಗಗಳಾಗಿ ವಿಂಗಡಿಸಿಹೋಗಿದ್ದು, ಆ ಪದ್ಧತಿ ಇಂದೂ ಮುಂದುವರಿದುಕೊಂಡು ಬರುತ್ತಿದೆ.

ಸವರ್ಣೀಯರ ದೃಷ್ಟಿಯಲ್ಲಿ ಈ ಎಲ್ಲಾ ವಿಧವಾದ ವೃತ್ತಿ ಪಂಗಡಗಳಿಗೆ ಸೇರಿದವರು ಇಂದೂ ಅಸ್ಪೃಶ್ಯರಾಗಿದ್ದರೂ, ವಿಧಿಯ ವಿಪರ್ಯಾಸದಿಂದಾಗಿ ನಗರ ನಿರ್ಮಲೀಕರಣ ಕೈಗೊಂಡಿರುವ ಪಂಗಡದವರು ಇತರೇ ಹರಿಜನ ವರ್ಗಗಳಿಂದ ಅಸ್ಪೃಶ್ಯರಾಗಿ ಪರಿಗಣಿಸಲ್ಪಡುತ್ತಿದ್ದಾರೆ. ಆದುದರಿಂದ ನಗರ ನಿರ್ಮಲೀಕರಣ ಕಾರ್ಯ ಕೈಗೊಂಡಿರುವವರು ಸಮಾಜದಲ್ಲಿ ಅತ್ಯಂತ ಕೆಳಮಟ್ಟದವರೆಂದು ಪರಿಗಣಿಸಲ್ಪಟ್ಟಿದ್ದು ಯಾವುದೇ ಸುಧಾರಣೆ ಅವರಿಗೆ ಲಭ್ಯವಾಗಿಲ್ಲ! ಈ ಅಸಂಬಂಧ ತಾರತಮ್ಯ ಅಂತ್ಯವಾಗಬೇಕಾದ್ದಲ್ಲಿ ನಗರ ನಿರ್ಮಲೀಕರಣ ಕಾರ್ಯವನ್ನು ಯಾವುದೇ ಒಂದು ಗುಂಪಿಗೆ ಅಥವಾ ಪಂಗಡಕ್ಕೆ ವಹಿಸಕೂಡದು.

ನಗರ ನಿರ್ಮಲೀಕರಣ ಕೆಲಸಮಾಡುವವರನ್ನು ಜಾಡಮಾಲಿ, ಭಂಗಿ ಎಂದು ಕರೆಯಲ್ಪಡುತ್ತಿದ್ದುದು ಈಗ ಅವರನ್ನು ಪೌರಕಾರ್ಮಿಕರು ಎಂದು ಕರೆಯಲಾಗುತ್ತಿದೆಯಾದರೂ ಅವರ ವೃತ್ತಿ ನಿರ್ವಹಣೆಯಲ್ಲಿ, ಅವರ ಸಾಮಾಜಿಕ ಸ್ಥಾನಮಾನದಲ್ಲಿ ಕಿಂಚಿತ್ ಬದಲಾವಣೆಯಾಗಿಲ್ಲ. ಅಸ್ಪೃಶ್ಯರನ್ನು ಗಾಂಧೀಜಿ ಅವರ ಆದೇಶದಂತೆ "ಹರಿಜನರು" ಎಂದು ಕರೆಯಲಾರಂಭಿಸಿದ ಜನ ಹೇಗೆ ಹರಿಜನರನ್ನು ಇಂದೂ ಸಾಮಾಜಿಕವಾಗಿ ದೂರವಿಟ್ಟಿದ್ದಾರೆಯೋ, ಹಾಗೆಯೇ ಇದೀಗ ಪೌರಕಾರ್ಮಿಕರು ಎಂದು ಕರೆಸಿಕೊಳ್ಳುತ್ತಿರುವವರ ಪಾಡು ಅದರಂತಾಗಿದೆ.

ಸ್ವಾತಂತ್ರ್ಯಾನಂತರ ಸಂವಿಧಾನಾತ್ಮಕವಾಗಿ ಹರಿಜನರಿಗೆ ಕೆಲವು ಸೌಲಭ್ಯಗಳನ್ನು ಮೀಸಲಾಗಿಡಲಾಯಿತು. ಆದರೆ ಈ ಸೌಲಭ್ಯಗಳ ಲಾಭ ನಗರ ನಿರ್ಮಲೀಕರಣ ಕೆಲಸ ಕೈಗೊಂಡ ಹರಿಜನರಿಗೆ ಸಿಗದೆ ಹರಿಜನರ ಇತರೇ ವರ್ಗಗಳು ಮಾತ್ರ ಎಲ್ಲವನ್ನೂ ದಕ್ಕಿಸಿಕೊಂಡು ಇವರ ಪಾಲಿಗೆ ಬೀದಿ ಗುಡಿಸುವುದು ಮತ್ತು ಹೇಸಿಗೆ ತೆಗೆಯುವುದನ್ನು ಬಿಟ್ಟಿದ್ದಾರೆ.

ಸೌಜನ್ಯ : ಭಂಗಿ ಬಂಧು

## ಚಿಕ್ಕಮಗಳೂರು ಜಿಲ್ಲಾ ಪತ್ರ

ರಾಜ್ಯದಲ್ಲಿ ತೀವ್ರ ಸಂಘಟನೆ ಕಾರ್ಯದಲ್ಲಿ ತೊಡಗಿರುವ ಅನೇಕ ದಲಿತ ಸಂಘರ್ಷ ಸಮಿತಿಗಳಲ್ಲಿ ಚಿಕ್ಕಮಗಳೂರು ಜಿಲ್ಲಾ ಶಾಖೆಯೂ ಒಂದು. ತನ್ನ ವ್ಯಾಪ್ತಿಗೆ ಸೇರಿದ ತಾಲ್ಲೂಕು ಮತ್ತು ಪ್ರತಿ ಹಳ್ಳಿಗಳ ಮಟ್ಟದಲ್ಲಿ ಸಂಘರ್ಷ ಸಮಿತಿ ಘಟಕಗಳನ್ನು ತೆರೆಯುತ್ತಿದೆ. ಈಗಾಗಲೇ ಮುಗಳವಳ್ಳಿ, ಮಾಗಡಿ, ಹಿರೇಮಗಳೂರು, ಲಕ್ಯಾಗ್ರಾಮ, ಸಂತವೇರಿ, ದಂಟರಮಕ್ಕಿ, ಬೀಳಿಕಲ್ಲು, ಮೂಡಿಗೆರೆ ತಾಲ್ಲೂಕು ಶಾಖೆ, ಕಡೂರು ತಾಲ್ಲೂಕು ಶಾಖೆ, ಬೀರೂರು, ತರೀಕೆರೆ ತಾಲ್ಲೂಕು, ಕುದುರೆಮುಖ, ಜಾವಳಿ ಮುಂತಾದ ಕಡೆ ದ. ಸ. ಸ. ಶಾಖೆಗಳನ್ನು ಆರಂಭಿಸಲಾಗಿದೆ.

## ದ. ಸ. ಸ. ಕಾರ್ಯಚಟುವಟಿಕೆ

ಈ ಎಲ್ಲಾ ಮೇಲ್ಕಂಡ ದ.ಸ.ಸ. ಶಾಖೆಗಳ ಆಶ್ರಯದಲ್ಲಿ ಇತ್ತೀಚೆಗೆ ಡಾ|| ಅಂಬೇಡ್ಕರ್‌ರವರ ಸ್ಮರಣ ದಿನಾಚರಣೆ ಆಚರಿಸಲಾಯಿತು.

ಅನೇಕ ಕಡೆ ಕಾರ್ಯಕ್ರಮದ ಅಂಗವಾಗಿ ದ.ಸ.ಸ. ಕಾರ್ಯಕರ್ತರು 'ಜೀತದ ಹಟ್ಟಿರಂಗ' 'ದಲಿತರು ಬರುವರು' ಎಂಬ ಕ್ರಾಂತಿಕಾರಿ ಬೀದಿ ನಾಟಕಗಳನ್ನು ಪ್ರದರ್ಶಿಸಿ ತಮ್ಮ ಮೇಲೆ ನಡೆಯುತ್ತಿರುವ ಶೋಷಣೆಯ ಸ್ತರಗಳನ್ನು ಗುರುತಿಸುವ ಯತ್ನವನ್ನು ಮಾಡಿದರು.

ದಲಿತರನ್ನು ಸುಡುತ್ತಿರುವ ಆರ್ಥಿಕ-ಸಾಮಾಜಿಕ ಅಸಮಾನತೆ, ಕೊಲೆ ಸುಲಿಗೆ ಇತ್ಯಾದಿ ಶೋಷಣೆಯ ಬಗೆಗೆ ಜನರಿಗೆ ತಿಳುವಳಿಕೆ ಕೊಡುವ ಯತ್ನದ ಮೂಲಕ ತೀವ್ರ ಸಂಘಟನೆಯಲ್ಲಿ ಜಿಲ್ಲಾ ಕಾರ್ಯಕರ್ತರು ತೊಡಗಿದ್ದಾರೆ.

ಈಗಾಗಲೇ ದಿನನಿತ್ಯ ಸುಮಾರು 12 ಕಡೆ ದಲಿತರ ಕೇರಿಗಳಲ್ಲಿ ಶಾಲಾಮಕ್ಕಳಿಗೆ ಸಂಜೆ ವೇಳೆ 6ರಿಂದ 8ರವರೆಗೆ ಉಚಿತ ಪಾಠದ ವ್ಯವಸ್ಥೆ ಮಾಡಲಾಗಿದೆ. ಇದರಿಂದಾಗಿ ಜಿಲ್ಲೆಯಲ್ಲಿ ಸುಮಾರು 500ಕ್ಕೂ ಹೆಚ್ಚು ಮಂದಿ ವಿದ್ಯಾರ್ಥಿಗಳಿಗೆ ಅನುಕೂಲವಾಗುತ್ತಿದೆ.

ದಲಿತರಿಗೆ ಸಂಬಂಧಿಸಿದ ಜಮೀನು ವಿವಾದ ಪ್ರಕರಣಗಳು ಮತ್ತು ಜಿಲ್ಲೆಯಲ್ಲಿ ಈಗಾಗಲೇ ಸಂಬಂಧಿಸಿದ ಎರಡು ಕೊಲೆ ಪ್ರಕರಣಗಳ ವ್ಯಾಪಕ ತನಿಖೆಗೆ ಶ್ರಮಿಸಲಾಗುತ್ತಿದೆ.

—ಎಂ. ಡಿ. ಗಂಗಯ್ಯ

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3. ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು.
ವಿಳಾಸ: 5-ಎ, ವಾಣಿ ವಾಣಿಜ್ಯ ಶಾಲಾ, ಪತ್ರಕರ್ತರ ಕಾಲೋನಿ, ಬೆಂಗಳೂರು-560 002